

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ | 976 |
| ಮಾನ್ಯ ಸದಸ್ಯರ ಹೆಸರು | ಶ್ರೀಮತಿ ಭಾರತಿ ಶೆಟ್ಟಿ |
| ಉತ್ತರಿಸಬೇಕಾದ ದಿನಾಂಕ | 20.09.2021 |
| ಉತ್ತರಿಸುವ ಸಚಿವರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ವೈದ್ಯಕೀಯ ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಬರೆದ ಉತ್ತರ ಪತ್ರಿಕೆಗಳನ್ನು ಯಾವ ರೀತಿಯಲ್ಲಿ ಓದಿ ಮೌಲ್ಯಮಾಪನ ಮಾಡಲಾಗುತ್ತಿದೆ | <u>ಮೌಲ್ಯಮಾಪನದ ಹಂತದ ವಿವರಗಳು ಈ ಕೆಳಕಂಡಂತಿವೆ.</u><br>1. ವಿಶ್ವವಿದ್ಯಾಲಯವು ಗುರುತಿಸಿರುವ ಪರೀಕ್ಷಾ ಕೇಂದ್ರಗಳಲ್ಲಿ ಲಿಖಿತ ಪರೀಕ್ಷೆ ನಡೆದ ನಂತರ **ಫೆರಿಫೆರಲ್ ಸ್ಕ್ಯಾನಿಂಗ್ ಪದ್ಧತಿ**ಯಂತೆ ಉತ್ತರ ಪತ್ರಿಕೆಗಳ ಪ್ರತಿಪುಟಗಳನ್ನು ಸ್ಕ್ಯಾನಿಂಗ್ ಮಾಡಲಾಗುವುದು.<br><br>2. ಎರಡನೇ ಹಂತದಲ್ಲಿ ಸ್ಕ್ಯಾನಿಂಗ್ ಮಾಡಲಾದ ಉತ್ತರ ಪತ್ರಿಕೆಗಳು ಮೌಲ್ಯಮಾಪಕರಿಗೆ ಚೆನ್ನಾಗಿ ಮತ್ತು ಪೂರ್ಣ ಪ್ರಮಾಣದಲ್ಲಿ ಹಾಗೂ ಒಂದರ ಮೇಲೆ ಇನ್ನೊಂದು ಪುಟ ಸ್ಕ್ಯಾನಿಂಗ್ ಆಗಿದೆಯೇ ಎಂದು ಸ್ಕ್ಯಾನಿಂಗ್‌ನ ಗುಣಮಟ್ಟವನ್ನು ಪರೀಕ್ಷಿಸಲಾಗುವುದು (Quality checking).<br><br>3. ತದನಂತರ ವಿಶ್ವವಿದ್ಯಾಲಯವು ಗುರುತಿಸಿರುವ ಮೌಲ್ಯಮಾಪನ ಕೇಂದ್ರಗಳಲ್ಲಿ ಗುರುತಿಸಿರುವ ಮೌಲ್ಯಮಾಪಕರಿಗೆ ಗಣಕ ಯಂತ್ರದಲ್ಲಿ ಪೂರ್ಣ ಪ್ರಮಾಣದಲ್ಲಿ ಕಾಣುವಂತಹ ತಂತ್ರಾಂಶ ಇದ್ದು ಉತ್ತರ ಪತ್ರಿಕೆಗಳನ್ನು ಓದಿ ಮೌಲ್ಯಮಾಪನ ನಡೆಸಲಾಗುವುದು. ಮುಂದುವರೆದು, ತಂತ್ರಾಂಶದಲ್ಲಿಯೇ ಮೌಲ್ಯಮಾಪಕರಿಗೆ ಪ್ರಶ್ನೆ ಪತ್ರಿಕೆಗಳನ್ನು ಕಾಣಿಸುವಂತೆ ಇದ್ದು, ಮೌಲ್ಯಮಾಪಕರು ಯಾವುದೇ ರೀತಿಯ ಸ್ಕ್ಯಾನಿಂಗ್ ದೋಷಗಳು ಕಂಡು ಬರುತ್ತದೆ ಎಂದು ತಿಳಿಸಿದಲ್ಲಿ, ಪುನಃ ಸ್ಕ್ಯಾನಿಂಗ್ ಮಾಡಿ ನಂತರ ಮೌಲ್ಯಮಾಪನಕ್ಕಾಗಿ ನೀಡಲಾಗುವುದು. |
| ಆ) | ಸದರಿ ವ್ಯವಸ್ಥೆ ಹಿಂದಿನ ವ್ಯವಸ್ಥೆಗಿಂತ ಯಾವ ರೀತಿಯ ಗುಣಮಟ್ಟದಲ್ಲಿ ಸುಧಾರಿಸಿದೆ ಅಥವಾ ಕಳಪೆಯಾಗಿದೆ. ಇದನ್ನು ಸುಧಾರಿಸಲು ಕೈಗೊಂಡ ಕ್ರಮಗಳೇನು | ಫೆರಿಫೆರಲ್ ಸ್ಕ್ಯಾನಿಂಗ್ ಪದ್ಧತಿಯಿಂದಾಗಿ ಈ ಕೆಳಕಂಡ ಸುಧಾರಿತ ಕ್ರಮಗಳು ಉಂಟಾಗಿವೆ.<br><br>1. ಹಿಂದಿನ ವ್ಯವಸ್ಥೆಯಲ್ಲಿ ಉತ್ತರ ಪ್ರತಿಗಳನ್ನು ಪರೀಕ್ಷಾ ಕೇಂದ್ರಗಳಿಂದ ಮೌಲ್ಯಮಾಪನ ಕೇಂದ್ರಗಳಿಗೆ ಸಾಗಿಸಬೇಕಿದ್ದು, ಆ ಸಮಯದಲ್ಲಿ ಹಲವಾರು ತೊಂದರೆಗಳನ್ನು ಎದುರಿಸಲಾಗುತ್ತಿತ್ತು. ಹೊಸ ವ್ಯವಸ್ಥೆಯಿಂದಾಗಿ ಈ ತೊಂದರೆಯು ಉದ್ಭವಿಸುತ್ತಿಲ್ಲ. |

| | | |
|---|---|---|
| | | 2. ಹಿಂದಿನ ವ್ಯವಸ್ಥೆಯಲ್ಲಿ ಮೌಲ್ಯಮಾಪನ ವಿಳಂಬವಾಗುತ್ತಿದ್ದು, ಫೆರಿಫೆರಲ್ ಸ್ಕ್ಯಾನಿಂಗ್ ಪದ್ಧತಿಯಿಂದಾಗಿ ಮೌಲ್ಯಮಾಪನವು ವಿಳಂಬವಾಗುತ್ತಿಲ್ಲ.<br><br>3. ಹಿಂದಿನ ವ್ಯವಸ್ಥೆಯಲ್ಲಿ ಫಲಿತಾಂಶ ನೀಡುವಲ್ಲಿ ತೊಂದರೆ ಆಗುತ್ತಿದ್ದು ಹೊಸ ಪದ್ಧತಿಯಿಂದಾಗಿ ಮೌಲ್ಯಮಾಪನಕ್ಕೆ ಹೆಚ್ಚಿನ ಸಮಯ ಸಿಗುವುದರ ಜೊತೆಗೆ ಫಲಿತಾಂಶ ನೀಡುವಲ್ಲಿ ವಿಳಂಬವಾಗುತ್ತಿಲ್ಲ. |
| ಇ) | ಸಾಮಾನ್ಯವಾಗಿ ಒಂದು ಉತ್ತರ ಪತ್ರಿಕೆ ಮೌಲ್ಯಮಾಪನಕ್ಕೆ ಉತ್ತಮವಾದ ಪರೀಕ್ಷಕರು ಎಷ್ಟು ಸಮಯ ತೆಗದುಕೊಳ್ಳುತ್ತಿದ್ದಾರೆ ಎಂಬ ಬಗ್ಗೆ ಮಾಹಿತಿಯನ್ನು ವಿಶ್ವವಿದ್ಯಾಲಯವು ಯಾವ ರೀತಿ ದೃಢೀಕರಿಸಿಕೊಳ್ಳುತ್ತದೆ. | ವಿಶ್ವವಿದ್ಯಾಲಯವು ಎಲ್ಲಾ ಕಾಲೇಜುಗಳಿಂದ ಅರ್ಹ ಶಿಕ್ಷಕರುಗಳ ವಿವರಗಳನ್ನು ಪಡೆದುಕೊಂಡಿದ್ದು, ಅವರುಗಳಿಗೆ ಮೌಲ್ಯಮಾಪನ ಕಾರ್ಯವನ್ನು ವಹಿಸಲಾಗುತ್ತದೆ. ಮೌಲ್ಯಮಾಪಕರು ಪ್ರತಿ ಉತ್ತರ ಪತ್ರಿಕೆಯ ಮೌಲ್ಯಮಾಪನಕ್ಕಾಗಿ ತೆಗೆದುಕೊಳ್ಳುವ ಸಮಯದ ವಿವರಗಳು ತಂತ್ರಾಂಶದಲ್ಲಿ ನಮೂದಾಗುತ್ತದೆ. |

ಸಂಖ್ಯೆ: ಎಂಇಡಿ 121 ಆರ್‌ಜಿಯು 2021

(ಡಾ|| ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು